## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1314

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 24.12.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಬಸ್ ನಿಲ್ದಾಣಗಳು ಮತ್ತು ಸಾರ್ವಜನಿಕ ಶೌಚಾಲಯಗಳು ಸ್ವಚ್ಛತೆಯ ಕೊರತೆಯಿಂದಾಗಿ ಪ್ರಯಾಣಿಕರು ವಿಧಿಯಿಲ್ಲದೇ ಬಳಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಾಲ್ಕೂ ಸಾರಿಗೆ ನಿಗಮಗಳಲ್ಲಿನ ಬಸ್ ನಿಲ್ದಾಣಗಳ ಆವರಣದ ಸ್ವಚ್ಛತೆ ಮತ್ತು ಶೌಚಾಲಯಗಳ ಸ್ವಚ್ಛತಾ ನಿರ್ವಹಣೆಯನ್ನು ಟೆಂಡರ್ ಮೂಲಕ ಆಯ್ಕೆಯಾದ ಅರ್ಹ ಮತ್ತು ಅನುಭವವುಳ್ಳ ಖಾಸಗಿ ಗುತ್ತಿಗೆದಾರರ/ ಪರವಾನಗಿದಾರರ ಮೂಲಕ ಸಂಸ್ಥೆಯೊಂದಿಗೆ ಒಳಪಟ್ಟಿರುವ ಕರಾರಿನನ್ವಯ ಬಸ್ ನಿಲ್ದಾಣಗಳ ಶೌಚಾಲಯಗಳನ್ನು ಸಮರ್ಪಕವಾಗಿ ನಿರ್ವಹಿಸಲಾಗುತ್ತಿದೆ. ಬಸ್ ನಿಲ್ದಾಣಗಳಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. |
| ಆ. | ಹಾಗಿದ್ದಲ್ಲಿ, ಸಾರ್ವಜನಿಕ ಬಸ್ ನಿಲ್ದಾಣಗಳ ಮತ್ತು ಶೌಚಾಲಯಗಳ ಸ್ವಚ್ಛತೆ ಕಾಪಾಡಿಕೊಳ್ಳಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಸ್ವಚ್ಛತೆ ಹಾಗೂ ಇತರೆ ಸಮಸ್ಯೆಗಳ ಸಂಬಂಧ ದೂರುಗಳ ಬಗ್ಗೆ ಕ್ರಮ ವಹಿಸುತ್ತಿದ್ದು, ನ್ಯೂನ್ಯತೆಗಳಿಗೆ ಗುತ್ತಿಗೆದಾರರಿಗೆ ಕರಾರು ನಿಯಮಾವಳಿಗಳನ್ವಯ ದಂಡ ವಿಧಿಸಲು ಕ್ರಮ ವಹಿಸಲಾಗುತ್ತಿದೆ. ಸದರಿ ಗುತ್ತಿಗೆದಾರರು ಸಾರ್ವಜನಿಕ ಪ್ರಯಾಣಿಕರ ತೃಪ್ತಿಗನುಗುಣವಾಗಿ ಸೇವೆಯನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಎಲ್ಲಾ ಬಸ್ ನಿಲ್ದಾಣಗಳಲ್ಲಿ ಮೂತ್ರಾಲಯ ಬಳಕೆ ಉಚಿತವಿದ್ದು, ಶೌಚಾಲಯ ಬಳಕೆಗೆ ದರಗಳನ್ನು ನಿಗಧಿಪಡಿಸಲಾಗಿದೆ. ಶೌಚಾಲಯಗಳ ಮುಂಭಾಗದಲ್ಲಿ ಶುಲ್ಕದ ವಿವರಗಳು ಹಾಗೂ ಸಮಸ್ಯೆಗಳ ಸಂಬಂಧ ಸಂಪರ್ಕಿಸಬೇಕಾದ ಅಧಿಕಾರಿಗಳ ಮೊಬೈಲ್ ಸಂಖ್ಯೆಯನ್ನು ನಮೂದಿಸಲಾಗಿದೆ. ನಿಗಮದ ಅಧಿಕಾರಿಗಳು ನಿಯಮಿತವಾಗಿ ಬಸ್ ನಿಲ್ದಾಣಗಳಿಗೆ ಭೇಟಿ ನೀಡಿ ಸ್ವಚ್ಛತೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಿದ್ದಾರೆ. |
| ಇ. | ಸಾರ್ವಜನಿಕ ಬಸ್ ನಿಲ್ದಾಣಗಳು ಮತ್ತು ಸಾರ್ವಜನಿಕ ಶೌಚಾಲಯಗಳ ನಿರ್ವಹಣೆಯ ಹೊಣೆ ಯಾರದ್ದು; ಅದಕ್ಕಾಗಿ ಸರ್ಕಾರ ಎಷ್ಟು ಅನುದಾನ ನೀಡುತ್ತದೆ; (ವಿವರ ನೀಡುವುದು) | ನಾಲ್ಕೂ ಸಾರಿಗೆ ನಿಗಮಗಳ ವ್ಯಾಪ್ತಿಯಲ್ಲಿನ ಬಸ್ ನಿಲ್ದಾಣಗಳಲ್ಲಿರುವ ಶೌಚಾಲಯ / ಮೂತ್ರಾಲಯಗಳ ಸ್ವಚ್ಛತಾ ನಿರ್ವಹಣೆಯ ಹೊಣೆಯು ಆಯಾ ನಿಗಮದ್ದಾಗಿರುತ್ತದೆ. ಸ್ವಚ್ಛತಾ ನಿರ್ವಹಣೆಗೆ ಸರ್ಕಾರದಿಂದ ಅನುದಾನ ನೀಡುವುದಿಲ್ಲ. |
| ಈ. | ಬೆಳಗಾವಿಯ ಬಸ್ ನಿಲ್ದಾಣದ ಆವರಣದ ಸುತ್ತ ಕಸದ ರಾಶಿ ಘನತ್ಯಾಜ್ಯದಿಂದ ಸಾರ್ವಜನಿಕರು ಮೂಗು ಮುಚ್ಚಿಕೊಂಡು ಓಡಾಡುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ; ಸ್ವಚ್ಛತೆ ಕಾಪಾಡಿಕೊಳ್ಳಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಹೌದು.<br><br>ಬೆಳಗಾವಿ ಬಸ್ ನಿಲ್ದಾಣದ ಒಳಗಿನ ಆವರಣದ ಸ್ವಚ್ಛತಾ ನಿರ್ವಹಣೆಯನ್ನು ಸಂಸ್ಥೆ ವತಿಯಿಂದ ನಿರ್ವಹಿಸಲಾಗುತ್ತಿದೆ. ಬಸ್ ನಿಲ್ದಾಣದ ಆವರಣದ ಸುತ್ತಮುತ್ತಲಿನ ಕಸ ಮತ್ತು ಘನತ್ಯಾಜ್ಯ ವಸ್ತುಗಳನ್ನು ವಿಲೇವಾರಿ ಮಾಡುವುದು ಬೆಳಗಾವಿಯ ದಂಡು ಮಂಡಲದ ವ್ಯಾಪ್ತಿಗೆ ಬರುತ್ತದೆ. ಈ ಸಂಬಂಧ ಸಂಸ್ಥೆಯ ವತಿಯಿಂದ ದಂಡು ಮಂಡಲ, ಬೆಳಗಾವಿ ಇವರಿಗೆ ಬಸ್ ನಿಲ್ದಾಣದ ಸುತ್ತಲಿನ ಕಸದ |

| | | |
|---|---|---|
| | | ರಾಶಿ ಘನ ತ್ಯಾಜ್ಯ ವಿಲೇವಾರಿ ಮಾಡುವಂತೆ ನಿರಂತರವಾಗಿ ಕೋರಲಾಗುತ್ತಿದೆ. |
| ಉ. | ರಾಜ್ಯದ ಎಲ್ಲಾ ಸಾರ್ವಜನಿಕ ಬಸ್ ನಿಲ್ದಾಣಗಳು ಮತ್ತು ಸಾರ್ವಜನಿಕ ಶೌಚಾಲಯಗಳ ಸ್ವಚ್ಛತೆಯ ಸಮಸ್ಯೆಗೆ ಶಾಶ್ವತ ಪರಿಹಾರ ನೀಡಲು ಸರ್ಕಾರ ಯಾವ ಕಠಿಣ ಕ್ರಮಗಳನ್ನು ಕೈಗೊಳ್ಳುವುದು? (ವಿವರ ಒದಗಿಸುವುದು) | ನಾಲ್ಕೂ ಸಾರಿಗೆ ಸಂಸ್ಥೆಗಳಲ್ಲಿನ ಸಾರ್ವಜನಿಕ ಬಸ್ ನಿಲ್ದಾಣಗಳು ಮತ್ತು ಸಾರ್ವಜನಿಕ ಶೌಚಾಲಯಗಳ ಸ್ವಚ್ಛತೆಗೆ ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿವೆ:<br>1. ಇ-ಟೆಂಡರ್ ಮೂಲಕ ಸ್ವಚ್ಛತಾ ಗುತ್ತಿಗೆದಾರರನ್ನು ನೇಮಕ ಮಾಡಿಕೊಳ್ಳಲಾಗುತ್ತಿದೆ.<br>2. ಶೌಚಾಲಯಗಳಿಗೆ ಸಾರಿಗೆ ನಿಗಮವು ನಿಗದಿಪಡಿಸಿದ ದರವನ್ನು ಬಳಕೆದಾರರಿಂದ ಆಕರಿಸಿ, ಗುತ್ತಿಗೆದಾರರು ಸ್ವಚ್ಛತೆಯ ನಿರ್ವಹಣೆ ಮಾಡಿಸುತ್ತಿದ್ದಾರೆ.<br>3. ಗುತ್ತಿಗೆದಾರರು ನಿರ್ವಹಿಸುವ ಶೌಚಾಲಯಗಳ ಸ್ವಚ್ಛತೆ ಕುರಿತು, ಬಸ್ ನಿಲ್ದಾಣದ ನಿಲ್ದಾಣಾಧಿಕಾರಿಗಳು/ಘಟಕ ವ್ಯವಸ್ಥಾಪಕರಿಂದ ಮೇಲಿಂದ ಮೇಲೆ ಮೇಲ್ವಿಚಾರಣೆ ಮಾಡಿಸಲಾಗುತ್ತಿದೆ.<br>4. ಶೌಚಾಲಯಗಳ ಸ್ವಚ್ಛತೆಗೆ ವಿಭಾಗ ಮಟ್ಟದಲ್ಲಿ ಅಧಿಕಾರಿಗಳ ತಂಡ ರಚಿಸಿ, ಮೇಲಿಂದ ಮೇಲೆ ಬಸ್ ನಿಲ್ದಾಣಗಳಿಗೆ ಭೇಟಿ ನೀಡುವ ಮೂಲಕ ಸ್ವಚ್ಛತೆಗೆ ಕ್ರಮ ವಹಿಸಲಾಗುತ್ತಿದೆ.<br>5. ಎಲ್ಲಾ ಬಸ್ ನಿಲ್ದಾಣಗಳಲ್ಲಿ ಮೂತ್ರಾಲಯ ಬಳಕೆ ಉಚಿತವಿದ್ದು, ಶೌಚಾಲಯ ಬಳಕೆಗೆ ಮಾತ್ರ ದರಗಳನ್ನು ನಿಗಧಿಪಡಿಸಲಾಗಿದೆ. ಸ್ವಚ್ಛತೆ ಮತ್ತು ಇತರೆ ಸಮಸ್ಯೆಗಳ ಸಂಬಂಧ ಸಂಪರ್ಕಿಸಬೇಕಾದ ಅಧಿಕಾರಿಗಳ ಮೊಬೈಲ್ ಸಂಖ್ಯೆಯನ್ನು ಎಲ್ಲಾ ಶೌಚಾಲಯಗಳ ಮುಂಭಾಗದಲ್ಲಿ ನಮೂದಿಸಲಾಗಿದೆ. ಬಸ್ ನಿಲ್ದಾಣದ ಮೇಲ್ವಿಚಾರಕರು ಶೌಚಾಲಯದ ಸ್ವಚ್ಛತೆಯ ಸಂಬಂಧ ನಿಯಮಿತವಾಗಿ ಪರಿಶೀಲಿಸುವ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>6. ಗುತ್ತಿಗೆದಾರರು ಸಮರ್ಪಕವಾಗಿ ಸ್ವಚ್ಛತೆಯ ಕಾರ್ಯನಿರ್ವಹಿಸದೇ ಇರುವುದು ಕಂಡುಬಂದಲ್ಲಿ, ನೋಟಿಸ್ ಜಾರಿ ಮಾಡಲಾಗುತ್ತಿದೆ. |

ಸಂಖ್ಯೆ: ಟಿಡಿ 308 ಟಿಸಿಕ್ಯೂ 2021

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು